# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1128 |
| ವಿಧಾನ ಪರಿಷತ್ತಿನ ಸದಸ್ಯರ ಹೆಸರು | : | ಡಾ|| ಚಂದ್ರಶೇಖರ್ ಬಿ. ಪಾಟೀಲ (ಪದವೀಧರರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 07.03.2022 |
| ಉತ್ತರಿಸುವ ಸಚಿವರು | : | ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ 2 ವರ್ಷಗಳಲ್ಲಿ ಕಲಬುರಗಿ, ಯಾದಗಿರಿ ಮತ್ತು ಬೀದರ್ ಜಿಲ್ಲೆಯಲ್ಲಿ ಎಷ್ಟು ಪಡಿತರ ಅಂಗಡಿ ಸ್ಥಾಪಿಸಲಾಗಿದೆ; (ವಿವರ ಒದಗಿಸುವುದು) | ಕಳೆದ ಎರಡು ವರ್ಷಗಳಲ್ಲಿ ಕಲಬುರಗಿ/ಬೀದರ್/ ಯಾದಗಿರಿ ಜಿಲ್ಲೆಯಲ್ಲಿ 08 ನ್ಯಾಯಬೆಲೆ ಅಂಗಡಿಗಳನ್ನು ತೆರೆಯಲಾಗಿದೆ.<br>ಜಿಲ್ಲೆಯ ಹೆಸರು — ಹೊಸದಾಗಿ ತೆರೆಯಲಾಗಿರುವ ನ್ಯಾಯಬೆಲೆ ಅಂಗಡಿಗಳ ಸಂಖ್ಯೆ<br>ಕಲಬುರಗಿ — 07<br>ಬೀದರ್ — 0<br>ಯಾದಗಿರಿ — 01<br>ಒಟ್ಟು — 08 |
| ಆ | ಪ್ರಸ್ತುತ ಎಷ್ಟು ಪಡಿತರ ಅಂಗಡಿಗಳು ಕಾರ್ಯನಿರ್ವಹಿಸುತ್ತಿವೆ; | ಕಲಬುರಗಿ, ಯಾದಗಿರಿ ಮತ್ತು ಬೀದರ್ ಜಿಲ್ಲೆಗಳಲ್ಲಿ ಒಟ್ಟು 2106 ನ್ಯಾಯಬೆಲೆ ಅಂಗಡಿಗಳು ಕಾರ್ಯನಿರ್ವಹಿಸುತ್ತಿವೆ. |
| ಇ | ಹೊಸದಾಗಿ ಪಡಿತರ ಅಂಗಡಿ ಸ್ಥಾಪನೆಗೆ ಸರ್ಕಾರ ಕೈಗೊಂಡ ಕ್ರಮವೇನು; ಮತ್ತು ಹೊಸ ಪಡಿತರ ಅಂಗಡಿ ಸ್ಥಾಪನೆಗೆ ಯಾವ ಯಾವ ಮಾನದಂಡ ಅನುಸರಿಸಲಾಗುವುದು? | ಕರ್ನಾಟಕ ಅಗತ್ಯ ವಸ್ತುಗಳ ಸಾರ್ವಜನಿಕ ವಿತರಣಾ ಪದ್ಧತಿ ನಿಯಂತ್ರಣ ಆದೇಶ 2016 ರ ಕಲಂ 11 ರಂತೆ ಪಟ್ಟಣ/ನಗರ ಪ್ರದೇಶಗಳಲ್ಲಿ 800 ಪಡಿತರ ಚೀಟಿಗಳನ್ನು, ಗ್ರಾಮಾಂತರ ಪ್ರದೇಶಗಳಲ್ಲಿ ಕನಿಷ್ಠ 500 ಪಡಿತರ ಚೀಟಿಗಳನ್ನು ನಿಯೋಜಿಸಿ ಹೊಸ ನ್ಯಾಯಬೆಲೆ ಅಂಗಡಿ ಮಂಜೂರು ಮಾಡಬಹುದು.<br>ಬುಡಕಟ್ಟು ಹಾಡಿಗಳು/ ತಾಂಡಗಳು/ ಗೊಲ್ಲರಹಟ್ಟಿ/ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಕಾಲೋನಿ ಇತ್ಯಾದಿಗಳಂತಹ ವಿಶೇಷ ಪ್ರದೇಶಗಳ ಅಗತ್ಯತೆಯನ್ನು ಪೂರೈಸಬೇಕಾಗಿದ್ದರೆ, ಅಂತಹ ಗ್ರಾಮೀಣ ಪ್ರದೇಶದ ನ್ಯಾಯಬೆಲೆ ಅಂಗಡಿಗೆ ಆ ಪರಿಮಿತಿಯನ್ನು 100 ಪಡಿತರ ಚೀಟಿಗಳಿಗೆ ಸರ್ಕಾರದ ಆದೇಶ ದಿನಾಂಕ 22.09.2021 ರನ್ವಯ ಸೀಮಿತಗೊಳಿಸಲಾಗಿರುತ್ತದೆ. ಸಂಬಂಧಿಸಿದ ಜಿಲ್ಲೆಗಳ ಜಂಟಿ/ಉಪನಿರ್ದೇಶಕರು ನ್ಯಾಯಬೆಲೆ ಅಂಗಡಿ ಮಂಜೂರಾತಿ ಸಕ್ಷಮ ಪ್ರಾಧಿಕಾರಿಗಳಾಗಿದ್ದು, |

ಕಲಬುರಗಿ/ಬೀದರ್/ಯಾದಗಿರಿ ಜಿಲ್ಲೆಗಳಲ್ಲಿ ಹೊಸದಾಗಿ ನ್ಯಾಯಬೆಲೆ ಅಂಗಡಿ ಮಂಜೂರಾತಿ ಕುರಿತು ಈ ಕೆಳಕಂಡಂತೆ ಕ್ರಮವಹಿಸಲಾಗಿದೆ.

| ಜಿಲ್ಲೆಯ ಹೆಸರು | ಹೊಸದಾಗಿ ನ್ಯಾಯಬೆಲೆ ಅಂಗಡಿಗಳನ್ನು | ಬುಡಕಟ್ಟು ಹಾಡಿಗಳು/ ತಾಂಡಗಳು/ಗೊಲ್ಲರಹಟ್ಟಿ / ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಕಾಲೋನಿ |
|---|---|---|
| ಕಲಬುರಗಿ | 21 ನ್ಯಾಯಬೆಲೆ ಅಂಗಡಿಗಳನ್ನು ತೆರೆಯಲು ಅಧಿಸೂಚನೆ ಹೊರಡಿಸಲಾಗಿರುತ್ತದೆ | 166 ತಾಂಡಗಳಲ್ಲಿ ನ್ಯಾಯಬೆಲೆ ಅಂಗಡಿಗಳನ್ನು ತೆರೆಯಲು ಅಧಿಸೂಚನೆ ಹೊರಡಿಸಲಾಗಿರುತ್ತದೆ |
| ಬೀದರ್ | 168 ನ್ಯಾಯಬೆಲೆ ಅಂಗಡಿಗಳನ್ನು ತೆರೆಯಲು ಅಧಿಸೂಚನೆ ಹೊರಡಿಸಲಾಗಿರುತ್ತದೆ | 44 ತಾಂಡಗಳಲ್ಲಿ ನ್ಯಾಯಬೆಲೆ ಅಂಗಡಿಗಳನ್ನು ತೆರೆಯಲು ಅಧಿಸೂಚನೆ ಹೊರಡಿಸಲಾಗಿರುತ್ತದೆ |
| ಯಾದಗಿರಿ | | ನ್ಯಾಯಬೆಲೆ ಅಂಗಡಿ ಮಂಜೂರು ಮಾಡುವ ಕುರಿತು ತಹಶೀಲ್ದಾರರಿಂದ ವರದಿ ಕೋರಲಾಗಿದ್ದು, ವರದಿ ಸ್ವೀಕೃತಿಯಾದ ನಂತರ ಹೊಸ ನ್ಯಾಯಬೆಲೆ ಅಂಗಡಿ ಮಂಜೂರು ಮಾಡಲಾಗುವುದು. |

ಆನಾಸ 20 ಆನಾಸ 2022 (ಇ-ಆಫೀಸ್)

(ಉಮೇಶ ವಿ. ಕತ್ತಿ)
ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು
ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.